ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಮಂಗಳವಾರ, ದಿನಾಂಕ : 23ನೇ ಜುಲೈ, 2019

ಮಾಹಿತಿ ಸಿಂಧು (ಕಂಪ್ಯೂಟರ್ ಶಿಕ್ಷಣ) ಶಿಕ್ಷಣದ ಬಗ್ಗೆ

ಶ್ರೀ ಕೆ.ಟಿ. ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ) :-

543 (682) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಜ್ಯದ ಸರ್ಕಾರಿ ಪ್ರೌಢ ಶಾಲೆಗಳಲ್ಲಿ ಎಷ್ಟು ವರ್ಷಗಳ ಕಾಲ ಮಾಹಿತಿ ಸಿಂಧು ಶಿಕ್ಷಕರು (ಕಂಪ್ಯೂಟರ್ ಶಿಕ್ಷಣ) ಕೆಲಸ ನಿರ್ವಹಿಸಿದ್ದಾರೆ ; ಮತ್ತು ಎಷ್ಟು ಜನ ನಿರ್ವಹಿಸುತ್ತಿದ್ದಾರೆ ;

(ಆ) ಈ ಮಾಹಿತಿ ಸಿಂಧು ಕಂಪ್ಯೂಟರ್ ಶಿಕ್ಷಣವನ್ನು ಸ್ಥಗಿತಗೊಳಿಸಿದ್ದು ಯಾವಾಗ ;

(ಇ) ಪ್ರತಿಯೊಬ್ಬ ವಿದ್ಯಾರ್ಥಿಗೂ ಕಂಪ್ಯೂಟರ್ ಶಿಕ್ಷಣದ ಅವಶ್ಯಕತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಈ) ಬಂದಿದ್ದಲ್ಲಿ, ಪ್ರತಿಯೊಂದು ಶಾಲೆಗಳಲ್ಲಿ ಕಂಪ್ಯೂಟರ್ ಶಿಕ್ಷಣ ಹಾಗೂ ಕಂಪ್ಯೂಟರ್ ಶಿಕ್ಷಕರನ್ನು ಕಡ್ಡಾಯವಾಗಿ ನೇಮಿಸಲು ಸರ್ಕಾರ ಕೈಗೊಂಡ ಕ್ರಮಗಳೇನು ? (ವಿವರ ನೀಡುವುದು)